ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ಶ್ರೀ ಧರ್ಮರಾಯಸ್ವಾಮಿ ಕರಗ ಉತ್ಸವಕ್ಕೆ ಸರದಿ ಅರ್ಚಕರನ್ನು ನೇಮಿಸುವ ಕುರಿತು

ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು):-

1171 (1394) ಮಾನ್ಯ ಮುಜರಾಯಿ ಹಾಗೂ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಬೆಂಗಳೂರು ನಗರದಲ್ಲಿರುವ ಶ್ರೀ ಧರ್ಮರಾಯಸ್ವಾಮಿ ದೇವಸ್ಥಾನದ ಕರಗ ಉತ್ಸವ ಆಚರಿಸಲು `ಸರದಿ' ಅರ್ಚಕರನ್ನು ನೇಮಿಸಲು ಮುಜರಾಯಿ ಇಲಾಖೆ 3 ವರ್ಷಗಳಿಂದ ಕ್ರಮ ಕೈಗೊಂಡಿದೆಯೇ ;

(ಆ) ಇದ್ದಲ್ಲಿ, ಇಲ್ಲಿಯವರೆಗೂ ಕೈಗೊಂಡ ಕ್ರಮಗಳ ಬಗ್ಗೆ ಮಾಹಿತಿ ನೀಡುವುದು ;

(ಇ) 2020ರಲ್ಲಿ ಮುಜರಾಯಿ ಇಲಾಖೆ ವತಿಯಿಂದ ನಡೆಯುವ ಬೆಂಗಳೂರು ಕರಗ ಹಾಗೂ ಇನ್ನಿತರೆ ಕರಗ ಉತ್ಸವಗಳಿಗೆ `ಉತ್ಸವ ಸಮಿತಿ' ರಚನೆ ಆಗಿದೆಯೇ ; ಅಥವಾ ಇನ್ನಾವುದಾದರೂ ಸಮಿತಿಯನ್ನು ರಚಿಸಲಾಗಿದೆಯೇ ;

(ಈ) 2020ರಲ್ಲಿ ಹಾಲಿ ಇರುವ ಸಮಿತಿಯ ವತಿಯಿಂದ ಕರಗ ಉತ್ಸವ ಆಚರಿಸಲಿದೆಯೇ ಅಥವಾ ಬೇರೆ ಉತ್ಸವ ಸಮಿತಿಯಿಂದ ಕರಗ ಉತ್ಸವ ಆಚರಿಸಲಾಗುವುದೇ ಎಂಬ ಬಗ್ಗೆ ಮಾಹಿತಿ ನೀಡುವುದು ?